# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **07 (290)**
ಸದಸ್ಯರ ಹೆಸರು : ಶ್ರೀ. ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 13.09.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು .

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಈ ಹಿಂದೆ ಶಿಕ್ಷಕರ ವೇತನ ತಾರತಮ್ಯ ಸರಿಪಡಿಸಲು (ಪ್ರೌಢಶಾಲಾ ಹಾಗೂ ಪದವಿಪೂರ್ವ ಶಿಕ್ಷಕರು, ಮುಖ್ಯ ಗುರುಗಳು, ಪ್ರಾಚಾರ್ಯರು, ಉಪನ್ಯಾಸಕರು) ಎಕ್ಸ್‌ಗ್ರೇಷಿಯಾ ನೀಡಲಾಗುತ್ತೇ; ಆ ಎಕ್ಸ್‌ಗ್ರೇಷಿಯಾವನ್ನು ಒಂದು ಇಂಕ್ರಿಮೆಂಟ್ ಆಗಿ ಪರಿವರ್ತಿಸಿ, ಮೂಲವೇತನದಲ್ಲಿ ಸೇರಿಸಲು 06ನೇ ವೇತನ ಆಯೋಗ ಶಿಫಾರಸ್ಸು ಮಾಡಿತ್ತೇ; | ಹೌದು. |
| (ಆ) | ಸದರಿ ಎಕ್ಸ್‌ಗ್ರೇಷಿಯಾವನ್ನು ಎಲ್ಲಾ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಪದವಿಪೂರ್ವ ಉಪನ್ಯಾಸಕರು, ಪ್ರಾಚಾರ್ಯರು ಇವರುಗಳಿಗೆ ನೀಡಲಾಗಿತ್ತೇ; ನೀಡಿರದಿದ್ದಲ್ಲಿ, ಯಾರಿಗೆ ಯಾವ ಯಾವ ಕಾರಣಕ್ಕಾಗಿ ನೀಡಲಾಗಿಲ್ಲ; (ವಿವರವಾದ ಸಂಪೂರ್ಣ ಮಾಹಿತಿಯನ್ನು ನೀಡುವುದು) ನೀಡಿದ್ದಲ್ಲಿ, ಈ ಹೆಚ್ಚುವರಿ ವೇತನ ಬಡ್ತಿಯನ್ನು ಮರುಪಾವತಿಸಿಕೊಳ್ಳಲು ಆದೇಶ ಹೊರಡಿಸಲಾಗಿದೆಯೇ; ಹೊರಡಿಸಿದ್ದರೆ, ಯಾವ ಕಾರಣಕ್ಕೆ ಹೊರಡಿಸಲಾಗಿದೆ: | ಎಕ್ಸ್‌ಗ್ರೇಷಿಯಾವನ್ನು ಎಲ್ಲಾ ಪ್ರೌಢ ಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಪದವಿಪೂರ್ವ ಉಪನ್ಯಾಸಕರು, ಪ್ರಾಚಾರ್ಯರು ಇವರುಗಳಿಗೆ ನೀಡಲಾಗಿದೆ. |
| (ಇ) | ದಿನಾಂಕ:01.08.2008ರ ನಂತರ ನೇಮಕವಾದ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರುಗಳಿಗೆ ಅದನ್ನು | |

| | | |
|---|---|---|
| | ಇಂಕ್ರಿಮೆಂಟ್ ಆಗಿ ಮೂಲ ವೇತನವನ್ನು ಸೇರಿಸುವಲ್ಲಿ ಅನ್ಯಾಯಕ್ಕೆ ಒಳಗಾಗಿದ್ದಾರೆ ಎಂಬುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ನಿಯಮಗಳನ್ನು ರೂಪಿಸುವ ಸರ್ಕಾರವೇ ನಿಯಮಗಳ ನೆಪವೊಡ್ಡಿ ಇವರಿಗೆ ಅನ್ಯಾಯ ಮಾಡುವುದು ಸರಿಯೇ; ಯಾವ ಕಾಲಮಿತಿಯೊಳಗೆ ಇವರಿಗೂ ಈ ಸೌಲಭ್ಯ ಒದಗಿಸಲಾಗುವುದು; ಹಾಗೂ ಮರುಪಾವತಿಸಿಕೊಳ್ಳುವ ಆದೇಶವನ್ನು ವಾಪಸ್ಸು ಪಡೆಯಲಾಗುವುದೇ; (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇಡಿ 255 ಎಸ್ಎಲ್‌ಬಿ 2016, ದಿನಾಂಕ:23.07.2018ರಲ್ಲಿ ದಿನಾಂಕ:01.08.2008ರ ನಂತರ ನೇಮಕಾತಿ ಹೊಂದಿದ ಸಹಶಿಕ್ಷಕರುಗಳಿಗೆ ವಿಶೇಷ ಭತ್ಯೆ ರೂ.400/-ಗಳನ್ನು ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ದಿನಾಂಕ:01.08.2008ರ ನಂತರ ನೇಮಕಾತಿ ಹೊಂದಿದ ಶಿಕ್ಷಕರುಗಳಿಗೆ ವಿಶೇಷ ಭತ್ಯೆಯನ್ನು ನೀಡಲಾಗುತ್ತಿಲ್ಲ.<br><br>ದಿನಾಂಕ:01/8/2008ರ ನಂತರ ನೇಮಕಾತಿ / ಬಡ್ತಿ ಹೊಂದಿದ ಶಿಕ್ಷಕರುಗಳಿಗೆ ನಿಯಮಬಾಹಿರವಾಗಿ ವಿಶೇಷ ಭತ್ಯೆ ಹೆಚ್ಚುವರಿ ಸಂದಾಯ ಮಾಡಿರುವ ಆಯಾ ಬಟವಾಡೆ ಅಧಿಕಾರಿಗಳೇ ನೇರ ಹೊಣೆಗಾರರಾಗಿರುತ್ತಾರೆ ಹಾಗೂ ಬಟವಾಡೆ ಅಧಿಕಾರಿಗಳಿಂದ ವಸೂಲಾತಿ ಮಾಡಿ ಸರ್ಕಾರಕ್ಕೆ ಜಮಾ ಮಾಡುವಂತೆ ದಿನಾಂಕ:05/02/2020ರಂದು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸುತ್ತೋಲೆಯನ್ನು ಹೊರಡಿಸಿರುತ್ತಾರೆ. |
| (ಈ) | ದಿನಾಂಕ:01.08.2008ರ ನಂತರ ನೇಮಕವಾದ ಪ್ರೌಢಶಾಲಾ ಶಿಕ್ಷಕರು, ಮುಖ್ಯ ಗುರುಗಳು, ಅನುದಾನಿತ ಶಿಕ್ಷಣ ಸಂಸ್ಥೆಗಳ ಶಿಕ್ಷಕರಿಗೆ ಇಂಕ್ರಿಮೆಂಟ್ ನೀಡುವಂತೆ ನ್ಯಾಯಾಲಯದಲ್ಲಿ ದಾವೆ ಹೂಡಿರುವ ಪ್ರಕರಣಗಳು ಇದ್ದಲ್ಲಿ, ಆ ಪ್ರಕರಣಕ್ಕೆ ನ್ಯಾಯಾಲಯದ ಆದೇಶದಂತೆ ಸರ್ಕಾರ ಕ್ರಮ ವಹಿಸುವುದೇ; ಈ ಕುರಿತು ಸರ್ಕಾರದ ನಿಲುವೇನು? | • ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 4412 ರಿಂದ 4428, 4430 ರಿಂದ 4444, 4446 ರಿಂದ 4464, 4467 ರಿಂದ 5224/2020ರ ಪ್ರಕರಣದಲ್ಲಿ ನ್ಯಾಯಾಲಯವು ದಿನಾಂಕ:05-05-2021ರ ತೀರ್ಪು ನೀಡಿರುತ್ತದೆ. ಈ ಬಗ್ಗೆ ಪರಿಶೀಲಿಸಲಾಗುತ್ತಿದೆ. |

**ಸಂಖ್ಯೆ: ಇಪಿ 162 ಎಸ್ಎಲ್‌ಬಿ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು